as consultant or consultants for a specific purpose and for a specific period on the terms and conditions agreed to in advance.

(6) The Member-Secretary shall have powers to execute all decisions taken by the Chairperson or any other member on his behalf relating to financial matters.

## SCHEDULE - I

### FORM-1

**(See rule 16(6))**

| Head of Accounts | Actual for the past three year | | | Sanctioned estimate for the current year 200… | Actual of last months i.e 200… 200… | Actuals of six months current year 200… | Revised estimate for the current year 200… | Budget estimate for the next year 200… | Variations between columns 5 & 8 | Variations between columns 8 & 9 | Explanation for columns 10 & 11 |
|---|---|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 10 | 11 | 12 |

### FORM II

Statement details of provision for pay of officers/Establishment for the year 200…..200….

**(See rule 16(6))**

| Name and Designation | Reference to page of estimate form | Sanctioned pay of the Post . | | | Amount of provisions for the year at the year at the rate in column | Increment falling due within the year | | | Total provision for the year i.e. total columns 4 & 5 | Remarks |
|---|---|---|---|---|---|---|---|---|---|---|
| | | Minimum/Maximum Actual pay of the Person concerned due on 1st April next year | | | | Date of increment | Rate of increment | Amount of increment for the year | | |
| | | (a) | (b) | (c) | 3(c) | (a) | (b) | (c) | | |

### FORM III

**(See rule 16(6))**

| Name and Designation | Pay | Dearness Allowance | Compensatory (City allowance) | House rent allowance | Over time allowance | Children educational allowance | Leave travel concession | Other allowance | Total |
|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 10 |
| | | | | | | | | | |
| | | | | | | | | | |

**FORM IV**

**(Abstract of Nominal Rolls)**

(See rule 16(6)

| Actual sanctioned strength as on 1st March 200…. | Particulars of Posts | Sanctioned budget grant 20… 20…. | | Revised budget grant 20… 20… | | Budget Estimates 20… 20…. | | Explanation for the difference between sanctioned budget revised estimates and budget estimates |
|---|---|---|---|---|---|---|---|---|
| | | No. of post included | Pay and allowances | No. of posts included | Pay and allowances | No. of posts included | Pay and allowances | |
| 1 | 2 | 3 | 4 | 5 | 6 | 6 | 8 | 9 |
| | I. Officer<br>(a) Posts filled<br>(b) Post vacant<br>Total I Officers<br>**II.** Establishment<br>(a) Posts filled<br>(b) Post vacant<br>Total II Establishment<br>III. Class IV<br>(a) Posts filled<br>(b) Post vacant<br>Total III-Class **IV.** | | | | | | | |
| | Grand Total I, II and III | | | | | | | |

**SCHEDULE II**

**BUDGET AND ACCOUNT HEADS**

**(See rule 16(8)**

**ADMINISTRATION**

**Heads of Accounts (Expenditure)**

1. Salaries

2. Wages
3. Travel Expenses
4. Office Expenses
   - (a) Furniture
   - (b) Postage
   - (c) Office machines/equipment
   - (d) Liveries
   - (e) Hot and cold weather charges
   - (f) Telephones
   - (g) Electricity and water charges
   - (h) Stationery
   - (i) Printing
   - (j) Staff car and other vehicles
   - (k) Other items
5. Fee and honoraria
6. Payment for professional and special services
7. Rents, rates and taxes/royalty
8. Publications
9. Advertising sales and publicity expenses
10. Grant in aid/contributions/subsidies
11. Hospitality expenses sumptuary allowances etc
12. Pensions/gratituities
13. Write off/losses
14. Suspenses
15. Other charges (a residuary head, this will also include rewards and prizes)

**Heads of Account (Receipts)**

1. Payments by Central Government
2. Other receipts

By Order and in the name of the Governor of Karnataka

P.R. 86

**Dr.D.S.ASWATH**

Secretary to Government

Women & Child Development Department

**ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ:ಗ್ರಾಅಪ 106 ಜಿಪಸ 2004, ಬೆಂಗಳೂರು, ದಿನಾಂಕ:7ನೇ ಜನವರಿ, 2010**

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 (1993ರ ಕರ್ನಾಟಕ ಅಧಿನಿಯಮ ಸಂಖ್ಯೆ.14) ರ ಪ್ರಕರಣ 136ಎ ಮತ್ತು 175ಎ ರೊಂದಿಗೆ ಓದಲಾದ ಪ್ರಕರಣ 311ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಕಂಡ ಕರ್ನಾಟಕ ಪಂಚಾಯತ್ ರಾಜ್ (ತಾಲ್ಲೂಕು ಪಂಚಾಯತಿ ಮತ್ತು ಜಿಲ್ಲಾ ಪಂಚಾಯತಿಗಳ ಚುನಾಯಿತ ಸದಸ್ಯರುಗಳ ಆಸ್ತಿ ಘೋಷಣೆ) ನಿಯಮಗಳು 2010ರ ಕರಡನ್ನು, ಸದರಿ ಕರಡು ನಿಯಮಗಳಿಂದ ಬಾಧಿತವಾಗಬಹುದಾದ ವ್ಯಕ್ತಿಗಳ ಮಾಹಿತಿಗಾಗಿ ಪ್ರಕಟಿಸಲಾಗಿದೆ ಮತ್ತು ಸದರಿ ಕರಡು ನಿಯಮಗಳನ್ನು ಅಂತಿಮಗೊಳಿಸಲು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಳಿಸಲಾದ ದಿನಾಂಕದಿಂದ 15 ದಿನಗಳ ನಂತರ ಪರಿಗಣನೆಗೆ ತೆಗೆದುಕೊಳ್ಳಲಾಗುವುದೆಂದು ಸೂಚಿಸಲಾಗಿದೆ.

ಸದರಿ ಕರಡು ನಿಯಮಗಳಿಗೆ ಸಂಬಂಧಿಸಿದಂತೆ, ಮೇಲೆ ತಿಳಿಸಿದ ಅವಧಿಯೊಳಗಾಗಿ ಯಾವುದೇ ವ್ಯಕ್ತಿಯಿಂದ ಸ್ವೀಕೃತವಾದ ಆಕ್ಷೇಪಣೆ ಮತ್ತು ಸಲಹೆಗಳನ್ನು ರಾಜ್ಯ ಸರ್ಕಾರವು ಪರಿಗಣಿಸುವುದು. ಆಕ್ಷೇಪಣೆಗಳು ಮತ್ತು ಸಲಹೆಗಳನ್ನು ಸರ್ಕಾರದ ಕಾರ್ಯದರ್ಶಿ (ಪಂಚಾಯತ್ ರಾಜ್), ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬಹುಮಹಡಿ ಕಟ್ಟಡ, ಮೂರನೇ ಮಹಡಿ, ಬೆಂಗಳೂರು–560 001 ಇವರಿಗೆ ಮೇಲ್ಕಂಡ ಅವಧಿಯೊಳಗಾಗಿ ಕಳುಹಿಸಬಹುದಾಗಿದೆ.

**ಕರಡು ನಿಯಮಗಳು**

**1. ಹೆಸರು ಮತ್ತು ಪ್ರಾರಂಭ:** (1) ಈ ನಿಯಮಗಳನ್ನು ಕರ್ನಾಟಕ ಪಂಚಾಯತ್ ರಾಜ್ (ತಾಲ್ಲೂಕು ಪಂಚಾಯತಿ ಮತ್ತು ಜಿಲ್ಲಾ ಪಂಚಾಯತಿಗಳ ಚುನಾಯಿತ ಸದಸ್ಯರ ಆಸ್ತಿ ಘೋಷಣೆ) ನಿಯಮಗಳು, 2010 ಎಂದು ಕರೆಯತಕ್ಕದ್ದು.

(2) ಇದು ರಾಜ್ಯ ಪತ್ರದಲ್ಲಿ ಪ್ರಕಟಿಸಿದಂದಿನಿಂದ ಜಾರಿಗೆ ಬರತಕ್ಕದ್ದು.

**2. ತಾಲ್ಲೂಕು ಪಂಚಾಯತಿ ಮತ್ತು ಜಿಲ್ಲಾ ಪಂಚಾಯತಿಗಳ ಚುನಾಯಿತ ಸದಸ್ಯರುಗಳ ಆಸ್ತಿ ಘೋಷಣೆಯ ರೀತಿ ಹಾಗೂ ನಮೂನೆ :** ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಪ್ರಕರಣ 136(ಎ) ಅನ್ವಯ ತಾಲ್ಲೂಕು ಪಂಚಾಯತ್ ಸದಸ್ಯರು ಮತ್ತು ಪ್ರಕರಣ 175(ಎ) ಅನ್ವಯ ಜಿಲ್ಲಾ ಪಂಚಾಯತ್ ಸದಸ್ಯರು ಸಂಬಂಧಪಟ್ಟ ಪ್ರಾದೇಶಿಕ ಆಯುಕ್ತರಿಗೆ ತಮ್ಮ ಪದಧಾರಣ ಮಾಡಿದ ದಿನಾಂಕದಿಂದ ಮೂರು ತಿಂಗಳೊಳಗೆ ಹಾಗೂ ತಮ್ಮ ಅವಧಿ ಪೂರ್ಣವಾಗುವವರೆವಿಗೆ ಪ್ರತಿ ಕ್ಯಾಲೆಂಡರ್ ವರ್ಷದ ಮೊದಲ ಒಂದು ತಿಂಗಳೊಳಗಾಗಿ ತಮ್ಮ ಹಾಗೂ ತಮ್ಮ ಕುಟುಂಬದ ಸದಸ್ಯರುಗಳು ಹೊಂದಿರುವ ಆಸ್ತಿಗಳ ಘೋಷಣೆಯನ್ನು ಈ ನಿಯಮಗಳ ಲಗತ್ತಿಸಿದ ಪ್ರಪತ್ರ ನಮೂನೆ (1) ರಲ್ಲಿ ಸಲ್ಲಿಸತಕ್ಕದ್ದು.

**3. ಅಧಿಕಾರಾವಧಿಯಲ್ಲಿ ಅರ್ಜಿಸಿದ ಆಸ್ತಿ ಅಥವಾ ವಿಲೆಯ ಬಗ್ಗೆ ಘೋಷಣೆ :–** ಒಬ್ಬ ಸದಸ್ಯನು 2ನೇಯ ನಿಯಮದ ಅಡಿಯಲ್ಲಿ ಒಂದು ಘೋಷಣೆಯನ್ನು ಸಲ್ಲಿಸಿದ ತರುವಾಯ, ಯಾವುದೇ ಆಸ್ತಿಯನ್ನು ಅರ್ಜಿಸಿದಲ್ಲಿ ಅಥವಾ ವಿಲೆ ಮಾಡಿದಲ್ಲಿ, ಅಂತಹ ಅರ್ಜನೆ ಅಥವಾ ಸಂದರ್ಭಾನುಸಾರ ವಿಲೆಯ ದಿನಾಂಕದಿಂದ ಮೂರು ತಿಂಗಳುಗಳೊಳಗೆ ಸಂಬಂಧಪಟ್ಟ ಪ್ರಾದೇಶಿಕ ಆಯುಕ್ತರ ಮುಂದೆ ಅವನು ಆ ಬಗ್ಗೆ ಮತ್ತೊಂದು ಘೋಷಣೆಯನ್ನು ನಮೂನೆ–1 ರಲ್ಲಿ ಸಲ್ಲಿಸತಕ್ಕದ್ದು.

4. **ಆಸ್ತಿ ವಿವರ ಸಲ್ಲಿಸದ ಸದಸ್ಯರ ಬಗ್ಗೆ ಕ್ರಮ:** **(1)** ತಾಲ್ಲೂಕು ಪಂಚಾಯತಿ/ಜಿಲ್ಲಾ ಪಂಚಾಯತಿಗಳ ಚುನಾಯಿತ ಸದಸ್ಯರುಗಳು ತಮ್ಮ ಹಾಗೂ ತಮ್ಮ ಕುಟುಂಬದ ಸದಸ್ಯರುಗಳ ಆಸ್ತಿ ವಿವರಗಳನ್ನು ನಿಯಮ (2) ಮತ್ತು (3) ರಡಿಯಲ್ಲಿ ಸಲ್ಲಿಸದಿದ್ದಲ್ಲಿ, ಅಥವಾ ಅದು ನಿಜವಾದುದಲ್ಲವೆಂದು ಅಥವಾ ಸರಿಯಾದುದಲ್ಲವೆಂದು ತಿಳಿದಿದ್ದೂ, ಅದನ್ನು ಸಲ್ಲಿಸಿದ್ದರೆ, ಅಂತಹ ಸದಸ್ಯನ ಸದಸ್ಯತ್ವವು ನಿಂತು ಹೋಗತಕ್ಕದ್ದು.

(2) ನೇ ನಿಯಮದ (1) ನೇ ಉಪ ನಿಯಮದನ್ವಯ ಸದಸ್ಯತ್ವ ನಿಂತುಹೋದಬಗ್ಗೆ ವಿವರಗಳನ್ನು ಪ್ರಾದೇಶಿಕ ಆಯುಕ್ತರು ಒಂದು ತಿಂಗಳೊಳಗೆ ರಾಜ್ಯ ಚುನಾವಣಾ ಆಯೋಗಕ್ಕೆ ತಿಳಿಸತಕ್ಕದ್ದು. ಮತ್ತು ಅದರ ಪ್ರತಿಯನ್ನು ಸಂಬಂಧಪಟ್ಟ ಸದಸ್ಯರಿಗೆ ಜಾರಿಗೊಳಿಸತಕ್ಕದ್ದು. ಆದರೆ ರಾಜ್ಯ ಚುನಾವಣಾ ಆಯೋಗವು ಈ ಬಗ್ಗೆ ಅಂತಿಮವಾಗಿ ತೀರ್ಮಾನಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಸ್ವರ್ಣಲತ ಎಂ. ಭಂಡಾರೆ**

ಸರ್ಕಾರದ ಅಧೀನ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ದಿ ಮತ್ತು ಪಂ.ರಾಜ್ ಇಲಾಖೆ

**<u>ನಮೂನೆ–1</u>**

**ಅಧಿಸೂಚನೆ ಸಂಖ್ಯೆ: ಗ್ರಾಅಪ 106 ಜಿಪಸ 2004 ದಿನಾಂಕ :07–01–2010**

ಕರ್ನಾಟಕ ಪಂಚಾಯತ್ ರಾಜ್ (ತಾಲ್ಲೂಕು ಪಂಚಾಯತಿ ಮತ್ತು ಜಿಲ್ಲಾ ಪಂಚಾಯತಿಗಳ ––––––––––––– ಚುನಾಯಿತ ಸದಸ್ಯರ ಅಧಿಕಾರಾವಧಿಯಲ್ಲಿ ಅರ್ಜಿಸಿದ ಆಸ್ತಿ ಅಥವಾ ವಿಲೆಯ ಘೋಷಣೆ) ನಿಯಮಗಳು 2010.

––––––––––––––––––––––––––––––––––ನೇ ವರ್ಷಕ್ಕಾಗಿ ಶ್ರೀ/ಶ್ರೀಮತಿ––––––––––––––––––––––––– – ಜಿಲ್ಲಾ ಪಂಚಾಯತಿ ಸದಸ್ಯ/ ತಾಲ್ಲೂಕು ಪಂಚಾಯತಿ ಸದಸ್ಯರಾದ ಇವರು ಭರ್ತಿ ಮಾಡಿರುವ ಆಸ್ತಿ ಮತ್ತು ದಾಯಿತ್ವಗಳ ವಿವರಣೆ

| | | |
|---|---|---|
| 1 | ಜಿಲ್ಲಾ ಪಂಚಾಯತಿ/ತಾಲ್ಲೂಕು ಪಂಚಾಯತಿ ಸದಸ್ಯರ ಖಾಯಂ ವಿಳಾಸ ಮತ್ತು ದೂರವಾಣಿ ಸಂಖ್ಯೆ | : |

| | | |
|---|---|---|
| 2. | ಜಿಲ್ಲಾ ಪಂಚಾಯತಿ/ತಾಲ್ಲೂಕು ಪಂಚಾಯತಿ ಸದಸ್ಯರ ಕುಟುಂಬದ ಸದಸ್ಯರ ಹೆಸರುಗಳು ಮತ್ತು ಪ್ರತಿಯೊಬ್ಬರಿಗಿರುವ ಸಂಬಂಧ | : |
| 3. | ಪ್ರಸ್ತುತ ವಾರ್ಷಿಕ ವರಮಾನ | |
| 4. | ಜಿಲ್ಲಾ ಪಂಚಾಯತಿ/ತಾಲ್ಲೂಕು ಪಂಚಾಯತಿ ಸದಸ್ಯರ ಆಸ್ತಿ ಮತ್ತು ದಾಯಿತ್ವಗಳ ವಿವರಣೆ | |
| | ಅ) ನಿಗಮ/ ಮಂಡಳಿಗಳಲ್ಲಿ ತೊಡಗಿಸಿರುವ ಹಣದ ವಿವರಗಳು | |
| | ಆ) ಬ್ಯಾಂಕ್ ಖಾತೆಗಳು | |
| | ಇ) ಬ್ಯಾಂಕ್ ಠೇವಣಿಗಳು | |
| | ಈ) ಅಂಚೆ ಕಚೇರಿ ಖಾತೆಗಳು | |
| | ಉ) ಅಂಚೆ ಕಚೇರಿ ಮೂಲಕ ಪಡೆದ ರಾಷ್ಟ್ರೀಯ ಉಳಿತಾಯ ಪ್ರಮಾಣ ಪತ್ರಗಳು ಹಾಗೂ ಇತರೆ ಪ್ರಮಾಣ ಪತ್ರಗಳು | |
| | ಊ) ಯುನಿಟ್ ಟ್ರಸ್ಟ್ ಆಫ್ ಇಂಡಿಯಾದ ಯುನಿಟ್‌ಗಳು | |
| | ಋ) ಸರ್ಕಾರಿ ಹಾಗೂ ಇತರೆ ಭದ್ರತೆಗಳು | |
| | ೠ) ಕಂಪನಿಗಳಲ್ಲಿ ತೊಡಗಿಸಿರುವ ಷೇರುಗಳು, ಡಿಬೆಂಚರುಗಳು ಅಥವಾ ಠೇವಣಿಗಳು | |
| | ಎ) ಸಾಲವಾಗಿ ಅಥವಾ ಅನ್ಯಥಾ ಇತರೆ ರೀತಿಯಲ್ಲಿ ಬೇರೆಯವರಿಗೆ ನೀಡಿದ ಮುಂಗಡ ಹಣ | |
| | ಏ) ಜೀವವಿಮಾ ಪಾಲಿಸಿಗಳು ಮತ್ತು ಭವಿಷ್ಯನಿಧಿ | |
| | ಐ) ಸ್ಥಿರಾಸ್ತಿಗಳು ಮೇಲಲ್ಲದೆ ಇತರೆಯವುಗಳ ಮೇಲೆ ಹೂಡಿದ ಬಂಡವಾಳಗಳು | |
| | **ಟಿಪ್ಪಣಿ:** ಮೇಲಿನ ವಿವರಗಳು ಕೋಷ್ಟಕದ ರೂಪದಲ್ಲಿದ್ದು ಅದರಲ್ಲಿ ಆಸ್ತಿಗಳನ್ನು ಅರ್ಜಿಸಿದ ದಿನಾಂಕ, ಬೆಲೆ ಮತ್ತು ಮೂಲವನ್ನೂ ಮತ್ತು ಅವುಗಳನ್ನು ಗುರುತಿಸಲು ಸಾಕಾಗುವಷ್ಟು ವಿವರಗಳನ್ನು ಯಾವ ವ್ಯಕ್ತಿಯ ಹೆಸರಿನಲ್ಲಿ ಮತ್ತು ಯಾವ ಸ್ಥಳದಲ್ಲಿ ಇವೆ ಎಂಬ ವಿವರಗಳು ಇರಬೇಕು | |
| 5. | 4ನೇ ಬಾಬ್ತಿನಲ್ಲಿ ಒಳಗೊಂಡಿರುವ ಇತರೆ ಚರಾಸ್ತಿಗಳು: | |
| | ಅ) ಆಭರಣಗಳು ಮತ್ತು ಚಿನ್ನ ಅಥವಾ ಬೆಳ್ಳಿಗಟ್ಟಿ | |
| | ಆ) ವಾಹನಗಳು | |
| | ಇ) ರೆಫ್ರಿಜರೇಟರು | |
| | ಈ) ವಿಡಿಯೋ ಕ್ಯಾಸೆಟ್ ಪ್ಲೇಯರ್‌ಗಳು | |
| | ಉ) ಹವಾ ನಿಯಂತ್ರಕಗಳು | |
| | ಊ) ಟೆಲಿವಿಷನ್ ಸೆಟ್ಟುಗಳು | |

| | | |
|---|---|---|
| | ಋ) ವಿಡಿಯೋ ಕ್ಯಾಸೆಟ್ ರೆಕಾರ್ಡರ್ | |
| | ೠ) ಪ್ರಾಚೀನ ವಸ್ತುಗಳು | |
| | ಎ) ಬೆಳ್ಳಿ ಸಾಮಗ್ರಿಗಳು | |
| | ಏ) ವ್ಯಾಪಾರ ಸಂಬಂಧಗಳು | |
| | ಐ) ಜಾನುವಾರು | |
| | ಒ) ರೂ. 5,000/– ಮೀರಿದ ಬೆಲೆಯ ಪೀಠೋಪಕರಣಗಳು ಸೇರಿದಂತೆ ಇತರೆ ಗೃಹೋಪಯೋಗಿ ವಸ್ತುಗಳು | |
| 6 | ಸ್ಥಿರಾಸ್ತಿಗಳು | |
| | ಅ) ಕೃಷಿ ಜಮೀನುಗಳು | |
| | ಆ) ಕಟ್ಟಡ ನಿರ್ಮಿಸಿರದ ಕೃಷಿಯೇತರ ಜಮೀನುಗಳು | |
| | ಇ) ಕಟ್ಟಡಗಳು | |
| | ಈ) ಇತರೆ ಸ್ಥಿರಾಸ್ತಿಗಳು | |
| | **ಟಿಪ್ಪಣಿ:** ನೀಡಬೇಕಾದ ಮಾಹಿತಿಯು ಕೋಷ್ಟಕದ ರೂಪದಲ್ಲಿದ್ದು ಅದರಲ್ಲಿ ಆಸ್ತಿಯ ಪಟ್ಟಿ ನಿರ್ವಹಿಸಿದ ದಿನಾಂಕ ಮತ್ತು ಮೂಲ ಹಾಗೂ ಅದರಲ್ಲಿ ಸದಸ್ಯರಿಗೆ ಇರುವ ಹಿತಾಸಕ್ತಿ ಅದರ ಸ್ಥಳ ಹಾಗೂ ಅದನ್ನು ಗುರುತಿಸಲು ಸಾಕಾಗುವಷ್ಟು ವಿವರಗಳು ಇರಬೇಕು. | |
| | **<u>ದಾಯಿತ್ವಗಳು</u>** | |
| | ಅ) ದಾಯಿತ್ವದ ಸ್ವರೂಪ: ವ್ಯಾಪ್ತಿ ಹಾಗೂ ಇತರೆ ವಿವರಗಳುಮತ್ತು ಅದನ್ನು ವಹಿಸಿಕೊಂಡ ದಿನಾಂಕ | |
| | ಆ) ಜಿಲ್ಲಾ ಪಂಚಾಯತಿ / ತಾಲ್ಲೂಕು ಪಂಚಾಯತಿ ಸದಸ್ಯರು ಯಾರಿಗೆ ಹೊಣೆಗಾರರಾಗಿರುವರೋ ಆ ವ್ಯಕ್ತಿಯ ಹೆಸರು ಮತ್ತು ವಿಳಾಸ | |
| | ಇ) ಜಿಲ್ಲಾ ಪಂಚಾಯತಿ/ತಾಲ್ಲೂಕು ಪಂಚಾಯತಿ ಸದಸ್ಯರ ಕುಟುಂಬದ ಸದಸ್ಯರ ಆಸ್ತಿಗಳು ಮತ್ತು ದಾಯಿತ್ವಗಳ ವಿವರಣೆ | |

———————————————————— ಆದ ನಾನು ಮೇಲೆ ನೀಡಿರುವ ಮಾಹಿತಿ ಸತ್ಯವಾದುದೆಂದು ಹಾಗೂ ಯಾವುದೇ ರೀತಿಯ ವಾಸ್ತವಾಂಶವನ್ನು ಬಿಟ್ಟಿಲ್ಲವೆಂದು ಪ್ರಮಾಣ ಮಾಡುತ್ತೇನೆ.

ಸ್ಥಳ : ಸದಸ್ಯರ ಸಹಿ——————————————

ದಿನಾಂಕ: ಪದನಾಮ ——————————————

ಕ್ಷೇತ್ರ ——————————————

ಪಿ.ಆರ್. 87

## ಸಹಕಾರ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ: ಸಇ 35 ಎಂಆರ್‌ಇ 2009, ಬೆಂಗಳೂರು, ದಿನಾಂಕ:8ನೇ ಜನವರಿ, 2010**

ಸರ್ಕಾರದ ಅಧಿಸೂಚನೆ ಸಂಖ್ಯೆ:ಸಇ 35 ಎಂಆರ್‌ಇ 2009 ದಿನಾಂಕ 6.10.2009ರಲ್ಲಿ ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ ಮತ್ತು ಅಭಿವೃದ್ಧಿ ಅಧಿನಿಯಮ, 1966ರ ಕಲಂ 11(1)(ix)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಭದ್ರಾವತಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ನಾಮನಿರ್ದೇಶನ ಮಾಡಲಾಗಿದ್ದ ಶ್ರೀ ಕೆ. ಸುಬ್ರಮಣಿ ಬಿನ್ ಕರ್ಬಣ್ಣ ಗೌಂಡರ್, ಅರಳಿಹಳ್ಳಿ ಅಂಚೆ, ಭದ್ರಾವತಿ ತಾ: ರವರ ನಾಮನಿರ್ದೇಶನವನ್ನು ರದ್ದುಪಡಿಸಿ, ಇವರ ಬದಲಿಗೆ ಶ್ರೀ ಗೋಪಾಲಪ್ಪ ಬಿನ್ ಕೆಂಜೇಡಿಯಪ್ಪ ಅತ್ತಿಗುಂದ, ಭದ್ರಾವತಿ ತಾಲ್ಲೂಕು ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಸಿ.ಕೆ. ವಾಸುದೇವಮೂರ್ತಿ**

ಪಿ.ಆರ್. 93

ಸರ್ಕಾರದ ಅಧೀನ ಕಾರ್ಯದರ್ಶಿ,

ಸಹಕಾರ ಇಲಾಖೆ

## ಕಂದಾಯ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ: ಆರ್‌ಡಿ 10 ಎಲ್‌ಜಿಕೆ 2009, ಬೆಂಗಳೂರು, ದಿನಾಂಕ:11ನೇ ಜನವರಿ, 2010**

ಕರ್ನಾಟಕ ಭೂ ಕಂದಾಯ ಕಾಯ್ದೆ, 1964, ಸಬ್ ಸೆಕ್ಷನ್ (1) ಸೆಕ್ಷನ್ 94–ಎ ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಚಿಕ್ಕಬಳ್ಳಾಪುರ ಜಿಲ್ಲೆಯ ಗೌರಿಬಿದನೂರು ತಾಲ್ಲೂಕು ಬಗರ್ ಹುಕುಂ ಸಾಗುವಳಿ ಸಕ್ರಮೀಕರಣ ಸಮಿತಿಯನ್ನು ಅಧಿಕಾರಿ ಹಾಗೂ ಅಧಿಕಾರೇತರ ಸದಸ್ಯರನ್ನೊಳಗೊಂಡಂತೆ, ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಕೆಳಕಂಡಂತೆ ಹೊಸದಾಗಿ ರಚಿಸಲಾಗಿದೆ.

| ಕ್ರ.ಸಂ | ತಾಲ್ಲೂಕು | ಸದಸ್ಯರು | |
|---|---|---|---|
| 1 | ಗೌರಿಬಿದನೂರು | ಶ್ರೀ ಎನ್.ಹೆಚ್. ಶಿವಶಂಕರರೆಡ್ಡಿ, ವಿಧಾನ ಸಭಾ ಸದಸ್ಯರು, ಗೌರಿಬಿದನೂರು ಕ್ಷೇತ್ರ. | ಅಧ್ಯಕ್ಷರು |
| 2 | | ಶ್ರೀ ಕೆ.ಎನ್. ವೆಂಕಟರಾಮರೆಡ್ಡಿ ಬಿನ್ ನಂಜುಂಡರೆಡ್ಡಿ, ಕುಂಟಚಿಕ್ಕನಹಳ್ಳಿ, ತೊಂಡೇಭಾವಿ ಹೋಬಳಿ, ಗೌರಿಬಿದನೂರು ತಾಲ್ಲೂಕು | ಸದಸ್ಯರು (ಸಾಮಾನ್ಯ) |
| 3 | | ಶ್ರೀ ಬಿ. ಬಾಲರಾಜು ಬಿನ್ ಬಾಲಗುರಪ್ಪ, ಇಸ್ತೂರಿ ಪೆಟ್ರೋಲ್ ಬಂಕ್ ಹಿಂಭಾಗ, ಗೌರಿಬಿದನೂರು, ಗೌರಿಬಿದನೂರು ತಾಲ್ಲೂಕು | ಸದಸ್ಯರು (ಪರಿಶಿಷ್ಟ ಜಾತಿ) |
| 4 | | ಶ್ರೀಮತಿ ಮಂಜುಳಮ್ಮ ಕೋಂ ರಮಾನಾಥರೆಡ್ಡಿ ಚಿಮಕಲಹಳ್ಳಿ, ನಗರಗೆರೆ ಹೋಬಳಿ, ಗೌರಿಬಿದನೂರು ತಾಲ್ಲೂಕು | ಸದಸ್ಯರು (ಮಹಿಳೆ) |
| 5 | | ತಹಶೀಲ್ದಾರರು, ಗೌರಿಬಿದನೂರು ತಾಲ್ಲೂಕು, ಗೌರಿಬಿದನೂರು | ಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಇ. ಈಶ್ವರ ನಾಯಕ್**

ಪಿ.ಆರ್. 94

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಮಂ)

**ಅಧಿಸೂಚನೆ**

**ಸಂಖ್ಯೆ: ಆರ್‌ಡಿ 11 ಎಲ್‌ಜಿಯು 2009, ಬೆಂಗಳೂರು, ದಿನಾಂಕ:2ನೇ ಜನವರಿ, 2010**

ಕರ್ನಾಟಕ ಭೂ ಕಂದಾಯ ಕಾಯ್ದೆ, 1964, ಸಬ್ ಸೆಕ್ಷನ್ (1) ಸೆಕ್ಷನ್ 94–ಎ ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಚಿಕ್ಕಮಗಳೂರು ಜಿಲ್ಲೆಯ "ಕಡೂರು ತಾಲ್ಲೂಕು" ಬಗರ್ ಹುಕುಂ ಸಾಗುವಳಿ ಸಕ್ರಮೀಕರಣ ಸಮಿತಿಯನ್ನು ಅಧಿಕಾರಿ ಹಾಗೂ ಅಧಿಕಾರೇತರ ಸದಸ್ಯರನ್ನೊಳಗೊಂಡಂತೆ, ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಕೆಳಕಂಡಂತೆ ಹೊಸದಾಗಿ ರಚಿಸಲಾಗಿದೆ.

| ಕ್ರ.ಸಂ | ತಾಲ್ಲೂಕು | ಸದಸ್ಯರು | |
|---|---|---|---|
| 1 | ಕಡೂರು | ಶ್ರೀ ಕೆ.ಎಂ. ಕೃಷ್ಣಮೂರ್ತಿ,<br>ಮಾನ್ಯ ಶಾಸಕರು, ಕಡೂರು ವಿಧಾನಸಭಾ ಕ್ಷೇತ್ರ. | ಅಧ್ಯಕ್ಷರು |
| 2 | | ಶ್ರೀ ಉಮಾಪತಿ,<br>ಸಿದ್ದರಾಮಹಳ್ಳಿ, ಮತಿಘಟ್ಟ ಅಂಚೆ, ಕಡೂರು ತಾಲ್ಲೂಕು | ಸದಸ್ಯರು (ಸಾಮಾನ್ಯ) |
| 3 | | ಶ್ರೀಮತಿ ತುಂಗಮ್ಮಕ್ಕ ಕೋಂ ಮಹೇಶ್ವರಪ್ಪ<br>ವೀರಶೈವ ಸೋಮನಾಥಪುರ ಕುಂಕಾನಾಡು | ಸದಸ್ಯರು (ಮಹಿಳೆ) |
| 4 | | ಶ್ರೀ ಓಬಳೇಶ್ವರ ಬಿನ್ ಮುದಿಯಪ್ಪ<br>ಇಂಗ್ಲಾರನಹಳ್ಳಿ ಬಿರೂರು ಅಂಚೆ, ಕಡೂರು ತಾಲ್ಲೂಕು | ಸದಸ್ಯರು (ಎಸ್.ಟಿ.) |
| 5 | | ತಹಶೀಲ್ದಾರರು, ಕಡೂರು ತಾಲ್ಲೂಕು, ಕಡೂರು | ಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಲ್. ಕೃಷ್ಣಪ್ಪ**

ಪಿ.ಆರ್. 95

ಪೀಠಾಧಿಕಾರಿ ,

ಕಂದಾಯ ಇಲಾಖೆ (ಭೂ ಮಂ–2)

**ಅಧಿಸೂಚನೆ ಸಂಖ್ಯೆ: ಆರ್‌ಡಿ 35 ಎಲ್‌ಜಿಟಿ 2009, ಬೆಂಗಳೂರು, ದಿನಾಂಕ:6ನೇ ಜನವರಿ, 2010**

ಕರ್ನಾಟಕ ಭೂ ಕಂದಾಯ ಕಾಯ್ದೆ, 1964, ಸಬ್ ಸೆಕ್ಷನ್ (1) ಸೆಕ್ಷನ್ 94–ಎ ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ತುಮಕೂರು ಜಿಲ್ಲೆ ಗುಬ್ಬಿ ತಾಲ್ಲೂಕಿನ ಬಗರ್ ಹುಕುಂ ಸಾಗುವಳಿ ಸಕ್ರಮೀಕರಣ ಸಮಿತಿಯನ್ನು ಕೆಳಕಂಡ ಅಧಿಕಾರಿ ಹಾಗೂ ಅಧಿಕಾರೇತರ ಸದಸ್ಯರನ್ನೊಳಗೊಂಡಂತೆ, ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಪುನರ್ ರಚಿಸಿ ಆದೇಶಿಸಿದೆ.

| ಕ್ರ.ಸಂ | ತಾಲ್ಲೂಕು | ಸದಸ್ಯರು | |
|---|---|---|---|
| 1 | ಗುಬ್ಬಿ | ಶ್ರೀ ಎಸ್.ಆರ್. ಶ್ರೀನಿವಾಸ (ವಾಸು), ಶಾಸಕರು | ಅಧ್ಯಕ್ಷರು |
| 2 | | ಕೆ.ಜಿ. ರಂಗಸ್ವಾಮಿ ಬಿನ್ ಗುಡ್ಡಯ್ಯ<br>ಕದಿರೇಗೌಡನಪಾಳ್ಯ ಗಳಗ ಅಂಚೆ, ಕಸಬಾ ಹೋಬಳಿ<br>ಗುಬ್ಬಿ ತಾಲ್ಲೂಕು | ಸದಸ್ಯರು (ಸಾಮಾನ್ಯ) |
| 3 | | ಕೆಂಪರಾಜು ಬಿನ್ ರಾಜಣ್ಣ<br>ಪತಿಯಪ್ಪನಪಾಳ್ಯ, ಅಳಿಲುಘಟ್ಟ ಅಂಚೆ, ಗುಬ್ಬಿ<br>ತಾಲ್ಲೂಕು | ಸದಸ್ಯರು (ಪ.ಜಾತಿ) |
| 4 | | ಶ್ರೀಮತಿ ಗಂಗಾಬಿಕ ಕೋಂ ಬಸವರಾಜು<br>ಹಳ್ಳೇನಹಳ್ಳಿ, ಕುನ್ನಾಲ ಅಂಚೆ ಕಡಬಾ ಹೋಬಳಿ, ಗುಬ್ಬಿ<br>ತಾ: | ಸದಸ್ಯರು (ಮಹಿಳೆ) |
| 5 | | ತಹಶೀಲ್ದಾರರು, ಗುಬ್ಬಿ ತಾಲ್ಲೂಕು, | ಸದಸ್ಯ ಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಕೆ. ನರಸಿಂಹಲು**

ಪಿ.ಆರ್. 96

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಭೂ ಮಂಜೂರಾತಿ–3)

**ಅಧಿಸೂಚನೆ**

**ಸಂಖ್ಯೆ: ಆರ್‌ಡಿ 68 ಎಲ್‌ಜಿಎಲ್ 2009, ಬೆಂಗಳೂರು, ದಿನಾಂಕ: 30ನೇ ಡಿಸೆಂಬರ್, 2009**

ಕರ್ನಾಟಕ ಭೂ ಕಂದಾಯ ಕಾಯ್ದೆ, 1964, ಸಬ್ ಸೆಕ್ಷನ್ (1) ಸೆಕ್ಷನ್ 94–ಎ ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಬೆಳಗಾವಿ ಜಿಲ್ಲೆ ಬೆಳಗಾವಿ ತಾಲ್ಲೂಕು (ಗ್ರಾಮಾಂತರ) ಬಗರ್ ಹುಕುಂ ಸಾಗುವಳಿ ಸಕ್ರಮೀಕರಣ ಸಮಿತಿಯನ್ನು ಕೆಳಕಂಡ ಅಧಿಕಾರಿ ಹಾಗೂ ಅಧಿಕಾರೇತರ ಸದಸ್ಯರನ್ನೊಳಗೊಂಡಂತೆ, ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಪುನರ್ ರಚಿಸಿ ಆದೇಶಿಸಿದೆ.

| ಕ್ರ.ಸಂ | ತಾಲ್ಲೂಕು | ಸದಸ್ಯರು | |
|---|---|---|---|
| 1 | ಬೆಳಗಾವಿ (ಗ್ರಾಮಾಂತರ) | ಶ್ರೀ ಸಂಜಯ ಬಿ. ಪಾಟೀಲ, ಶಾಸಕರು | ಅಧ್ಯಕ್ಷರು |
| 2 | | ಶ್ರೀ ಮೋಹನ ರಾಮಚಂದ್ರ ಪಾಟೀಲ್ ಮಹಾದೌಆರ ರಸ್ತೆ, ಕಂಗ್ರಾಳಿ ಕೆ.ಹೆಚ್. | ಸದಸ್ಯರು (ಸಾಮಾನ್ಯ) |
| 3 | | ಶ್ರೀ ಎಂ.ಡಿ. ಹರಿಜನ ಸಾ: ಹಾಲಗಿಮರ್ಡಿ, ಬೆಳಗಾವಿ ತಾಲ್ಲೂಕು | ಸದಸ್ಯರು (ಪ.ಜಾತಿ) |
| 4 | | ಶ್ರೀಮತಿ ಅರುಣಾ ಭೋಗಲೆ (ಭಾವಿಮನೆ) ಸಹ್ಯಾದ್ರನಗರ, ಹಿಂಡಲಗಾ, ಬೆಳಗಾವಿ ತಾಲ್ಲೂಕು | ಸದಸ್ಯರು (ಮಹಿಳೆ) |
| 5 | | ತಹಶೀಲ್ದಾರರು, ಬೆಳಗಾವಿ ತಾಲ್ಲೂಕು, | ಸದಸ್ಯ ಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಕೆ. ನರಸಿಂಹಲು**

ಪಿ.ಆರ್. 97

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಭೂ ಮಂಜೂರಾತಿ–3)

**ಅಧಿಸೂಚನೆ**

**ಸಂಖ್ಯೆ: ಆರ್‌ಡಿ 88 ಎಲ್‌ಜಿಡಿ 2009, ಬೆಂಗಳೂರು, ದಿನಾಂಕ: 30ನೇ ಡಿಸೆಂಬರ್, 2009**

ಕರ್ನಾಟಕ ಭೂ ಕಂದಾಯ ಕಾಯ್ದೆ, 1964, ಸಬ್ ಸೆಕ್ಷನ್ (1) ಸೆಕ್ಷನ್ 94–ಎ ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಧಾರವಾಡ ಜಿಲ್ಲೆ ಕಲಘಟಗಿ ತಾಲ್ಲೂಕಿನ ಬಗರ್ ಹುಕುಂ ಸಾಗುವಳಿ ಸಕ್ರಮೀಕರಣ ಸಮಿತಿಯನ್ನು ಕೆಳಕಂಡ ಅಧಿಕಾರಿ ಹಾಗೂ ಅಧಿಕಾರೇತರ ಸದಸ್ಯರನ್ನೊಳಗೊಂಡಂತೆ, ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಪುನರ್ ರಚಿಸಿ ಆದೇಶಿಸಿದೆ.

| ಕ್ರ.ಸಂ | ತಾಲ್ಲೂಕು | ಸದಸ್ಯರು | |
|---|---|---|---|
| 1 | ಕಲಘಟಗಿ | ಶ್ರೀ ಸಂತೋಷ್ ಎಸ್. ಲಾಡ್, ಶಾಸಕರು | ಅಧ್ಯಕ್ಷರು |
| 2 | | ಶ್ರೀ ಗುರುನಾಥಗೌಡ ಉಳಿವನಗೌಡ ಬಸವನಗೌಡ ಅರಳಿಹೊಂಡ, ತಾಲ್ಲೂಕು ಕಲಘಟಗಿ | ಸದಸ್ಯರು (ಸಾಮಾನ್ಯ) |
| 3 | | ಶ್ರೀ ಬಸಪ್ಪ ಗಿಡ್ಡಪ್ಪ ಅಳ್ಳಿಗೇರಿ ಗಂಜೀಗಟ್ಟಿ ತಾಲ್ಲೂಕು ಕಲಘಟಗಿ | ಸದಸ್ಯರು (ಪ.ಜಾತಿ) |
| 4 | | ಶ್ರೀಮತಿ ಸಾವಕ್ಕ ಹನುಮಂತಪ್ಪ ಕುರುಬರ ಚಳಮಟ್ಟಿ ತಾಲ್ಲೂಕು ಕಲಘಟಗಿ | ಸದಸ್ಯರು (ಮಹಿಳೆ) |
| 5 | | ತಹಶೀಲ್ದಾರರು, ಕಲಘಟಗಿ ತಾಲ್ಲೂಕು, | ಸದಸ್ಯ ಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಕೆ. ನರಸಿಂಹಲು**

ಪಿ.ಆರ್. 98

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಭೂ ಮಂಜೂರಾತಿ–3)

**HEALTH AND FAMILY WELFARE SECRETARIAT**

**NOTIFICATION**

**No:HFW 136 CGE 2009, Bangalore, Dated: 13th January, 2010**

In exercise of the powers conferred by clause (vii) and (viii) (a) of section 2 and section 8 of the Prevention of Food Adulteration Act 1954 (Central Act 37 of 1954), the Government of Karnataka hereby appoint and notify the person specified in column 2 of the Schedule below having the qualification prescribed under sub rule 1 & 2 of rule 6 of Prevention of Food Adulteration Rules, 1955 and working within the institution specified in column 3 thereof to be the public Analyst for the purpose of the said Act and Rules for the areas of the local body/local area specified in the corresponding entries in column 4 there of.

SCHEDULE

| Sl. No | Name of the official with Designation | Place of working | Local Area/Local Body |
|---|---|---|---|
| 1 | Sri Abdul Hameed Kalmani, Junior Chemist | Public Health Institute, Bangalore | For such Local Area/ Local Body where she may be posted from time to time |

By Order and in the name of the Governor of Karnataka

P.R. 99

**K.S. SAROJAMMA**

Under Secretary to Government

Health & Family Welfare Department

**ಆರ್ಥಿಕ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ:ಆಇ 1301 ವೆಚ್ಚ–12/09, ಬೆಂಗಳೂರು, ದಿನಾಂಕ:13ನೇ ಜನವರಿ, 2010**

ಬೆಂಗಳೂರು–ಒನ್ (B-1) ಕೇಂದ್ರಗಳು ಹಾಗೂ ಹುಬ್ಬಳ್ಳಿ, ಧಾರವಾಡ, ಬೆಳಗಾಂ, ಬಳ್ಳಾರಿ, ಗುಲ್ಬರ್ಗಾ, ಮೈಸೂರು, ಮಂಗಳೂರು ಶಿವಮೊಗ್ಗ, ದಾವಣಗೆರೆ ಹಾಗೂ ತುಮಕೂರು ಜಿಲ್ಲೆಗಳಲ್ಲಿ ಹೊಸದಾಗಿ ಸ್ಥಾಪಿಸಲ್ಪಡುವ ನಾಗರೀಕ ಕೇಂದ್ರಗಳೆರಡನ್ನು ಒಳಗೊಂಡಂತೆ ಈಗಾಗಲೇ ಇರುವ ಬೆಂಗಳೂರು–ಒನ್ ಮತ್ತು ಕರ್ನಾಟಕ–ಒನ್ ಕೇಂದ್ರಗಳಲ್ಲಿನ ಒಳಾಂಗಣ ವಿನ್ಯಾಸದ ಕೆಲಸ ಕಾರ್ಯವನ್ನು ಅತಿ ತುರ್ತಾಗಿ ಪೂರ್ಣಗೊಳಿಸಬೇಕಾಗಿದ್ದು, ಸದರಿ ಕಾಮಗಾರಿಯ ಕೆಲಸ ಕಾರ್ಯಗಳನ್ನು ನೇರವಾಗಿ ಕರ್ನಾಟಕ ರಾಜ್ಯ ನಿರ್ಮಾಣ ಕೇಂದ್ರ (KARNIK) ಸಂಸ್ಥೆಗೆ ವಹಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಸರ್ಕಾರವು ಸಿ.ಆ.ಸು.ಇ (ಆ.ಸು) ಇ–ಆಡಳಿತ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎನ್. ಚಂದ್ರಕುಮಾರ್**

ಪಿ.ಆರ್. 100

ಸರ್ಕಾರದ ಉಪ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ)

**ಅಧಿಸೂಚನೆ**

**ಸಂಖ್ಯೆ:ಆಇ 1377 ವೆಚ್ಚ –12/09, ಬೆಂಗಳೂರು, ದಿನಾಂಕ:8ನೇ ಜನವರಿ, 2010**

ಅಧ್ಯಕ್ಷರು, ಕುಕ್ಕುಟ ಮಹಾಮಂಡಳಿಯವರ ಕೋರಿಕೆಯ ಹಿನ್ನೆಲೆಯಲ್ಲಿ ಕರ್ನಾಟಕ ಭೂ ಸೇನಾ ನಿಗಮ ಮತ್ತು ನಿರ್ಮಿತಿ ಕೇಂದ್ರಗಳಿಗೆ ಯೋಜನೆ ಕಾಮಗಾರಿಗಳನ್ನು ವಹಿಸಲು ಮಾರ್ಚ್ 2010 ರವರೆಗೆ ವಿನಾಯಿತಿಯನ್ನು ನೀಡಿದ ಅಧಿಸೂಚನೆ ಸಂಖ್ಯೆ:ಆಇ 1120 ವೆಚ್ಚ–12/09, ದಿ:8.10.2009 ನ್ನು ಹಿಂತೆಗೆದುಕೊಂಡು/ರದ್ದುಪಡಿಸಿ, ಕೇಂದ್ರ ಪುರಸ್ಕೃತ ರಾಷ್ಟ್ರೀಯ ಕೃಷಿ ವಿಕಾಸ ಯೋಜನೆಯಡಿ (RKVY) ಸಿವಿಲ್ ಕಾಮಗಾರಿಗಳನ್ನು ಕರ್ನಾಟಕ ಗ್ರಾಮಾಂತರ ಬಿಲ್ಡಿಂಗ್ ಸೆಂಟರ್

(KGBC) ಸಂಸ್ಥೆ, ಬೆಂಗಳೂರು, ಇವರಿಗೆ ನೇರವಾಗಿ ವಹಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999 ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಸರ್ಕಾರವು ಪಶು ಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎನ್. ಚಂದ್ರಕುಮಾರ್**

ಪಿ.ಆರ್. 101 ಸರ್ಕಾರದ ಉಪ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ)

**ಅಧಿಸೂಚನೆ**

**ಸಂಖ್ಯೆ:ಆಇ 1438 ವೆಚ್ಚ –12/09, ಬೆಂಗಳೂರು, ದಿನಾಂಕ: 11ನೇ ಜನವರಿ, 2010**

ಕರ್ನಾಟಕ ಸಹಕಾರಿ ಹಾಲು ಉತ್ಪಾದಕರ ಮಹಾ ಮಂಡಳಿಯು (ಕೆ.ಎಂ.ಎಫ್) 2009–10ನೇ ಸಾಲಿನಲ್ಲಿ ಉತ್ತಮ ಗುಣಮಟ್ಟ ಪಶು ಆಹಾರವನ್ನು ನಿರಂತರವಾಗಿ ಸರಬರಾಜು ಮಾಡಲು ಅವಶ್ಯವಾಗಿರುವ ಮೆಕ್ಕೆ ಜೋಳವನ್ನು ರೈತರಿಂದ ನೇರವಾಗಿ ಖರೀದಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ–1999 ರ ಕಲಂ 4(ಜಿ)ರಡಿಯಲ್ಲಿ ಪ್ರದತ್ತವಾದ ಅಧಿಕಾರ ಚಲಾಯಿಸಿ ಸರ್ಕಾರವು ಪಶು ಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ಒಂದು ವರ್ಷದ ಅವಧಿಗೆ ವಿನಾಯಿತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎನ್. ಚಂದ್ರಕುಮಾರ್**

ಪಿ.ಆರ್. 102 ಸರ್ಕಾರದ ಉಪ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ)

**ಅಧಿಸೂಚನೆ**

**ಸಂಖ್ಯೆ:ಆಇ 1294 ವೆಚ್ಚ –12/09, ಬೆಂಗಳೂರು, ದಿನಾಂಕ:13ನೇ ಜನವರಿ, 2010**

ತೋಟಗಾರಿಕೆ ಕ್ಷೇತ್ರ ಮತ್ತು ನರ್ಸರಿಗಳನ್ನು ಸರ್ಕಾರಿ/ಖಾಸಗಿ, ಸಹಭಾಗಿತ್ವದಲ್ಲಿ (PPP) ಅಭಿವೃದ್ಧಿಗೊಳಿಸುವ, 2ನೇ ಹಂತದ request for proposal (RFP) ಗೆ ಮೆ:ಐಡೆಕ್ (iDeck) ಸಂಸ್ಥೆಯನ್ನು ಸಲಹೆಗಾರರನ್ನಾಗಿ ನೇರವಾಗಿ ನೇಮಿಸಿಕೊಳ್ಳಲು, ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, 1999ರ ಕಲಂ 4(ಜಿ) ಅಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಸರ್ಕಾರವು ಕೃಷಿ ಮತ್ತು ತೋಟಗಾರಿಕೆ (ತೋಟಗಾರಿಕೆ ಇಲಾಖೆ) ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎನ್. ಚಂದ್ರಕುಮಾರ್**

ಪಿ.ಆರ್. 103 ಸರ್ಕಾರದ ಉಪ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ)

**ಅಧಿಸೂಚನೆ**

**ಸಂಖ್ಯೆ:ಆಇ 1324 ವೆಚ್ಚ –12/09, ಬೆಂಗಳೂರು, ದಿನಾಂಕ:13ನೇ ಜನವರಿ, 2010**

Citizen Service Centres ಹಾಗೂ Back office ಗಳನ್ನು ಹುಬ್ಬಳ್ಳಿ– ಧಾರವಾಡ, ಮಂಗಳೂರು, ಶಿವಮೊಗ್ಗ ಬಳ್ಳಾರಿ ಹಾಗೂ ಮೈಸೂರು ಜಿಲ್ಲೆಗಳಲ್ಲಿ ಸ್ಥಾಪಿಸುವ ಕಾರ್ಯವನ್ನು ನೇರವಾಗಿ ಕರ್ನಾಟಕ ಗ್ರಾಮೀಣ ಮೂಲಸೌಕರ್ಯ ಅಭಿವೃದ್ಧಿ (KRiDL) ಸಂಸ್ಥೆಗೆ ವಹಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ಕಲಂ 4(ಜಿ) ಅಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಸರ್ಕಾರವು ಕಂದಾಯ ಇಲಾಖೆಗೆ ವಿನಾಯಿತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎನ್. ಚಂದ್ರಕುಮಾರ್**

ಪಿ.ಆರ್. 104 ಸರ್ಕಾರದ ಉಪ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ)

**ಅಧಿಸೂಚನೆ**

**ಸಂಖ್ಯೆ:ಆಇ 1397 ವೆಚ್ಚ –12/09, ಬೆಂಗಳೂರು, ದಿನಾಂಕ:13ನೇ ಜನವರಿ, 2010**

ಬೆಂಗಳೂರು ವಿಶ್ವವಿದ್ಯಾನಿಲಯದಲ್ಲಿ ಪರೀಕ್ಷೆ ನಡೆಸುವ ಸಂಬಂಧ ಅಗತ್ಯವಿರುವ ಪ್ರಶ್ನೆ ಪತ್ರಿಕೆಗಳನ್ನು ಹಾಗೂ ಉತ್ತರ ಪತ್ರಿಕೆಗಳನ್ನು ಮುದ್ರಿಸುವ, ಪರೀಕ್ಷಾ ಕೇಂದ್ರಗಳಿಗೆ ಸರಬರಾಜು ಮಾಡುವ ಹಾಗೂ ಉತ್ತರ ಪತ್ರಿಕೆಗಳನ್ನು ಮೌಲ್ಯಮಾಪನ ಕೇಂದ್ರಗಳಿಗೆ ಕಳುಹಿಸಿ ಕೊಡುವ ಕಾರ್ಯಗಳನ್ನು ನೇರವಾಗಿ ಕೈಗೊಳ್ಳುವುದಕ್ಕೆ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999 ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಸರ್ಕಾರವು ಬೆಂಗಳೂರು ವಿಶ್ವವಿದ್ಯಾನಿಲಯಕ್ಕೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎನ್. ಚಂದ್ರಕುಮಾರ್**

ಪಿ.ಆರ್. 105

ಸರ್ಕಾರದ ಉಪ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ)

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ಅಪಜೀ 35 ಇಎನ್‌ವಿ 2009, ಬೆಂಗಳೂರು, ದಿನಾಂಕ: 15ನೇ ಜನವರಿ, 2010.**

ಜೈವಿಕ ವೈವಿಧ್ಯತೆಯ ಅಂತರರಾಷ್ಟ್ರೀಯ ಸಮಾವೇಶದ ನಂತರ ಭಾರತ ಸರ್ಕಾರ 2002ರಲ್ಲಿ ಜೀವವೈವಿಧ್ಯ ಅಧಿನಿಯಮವನ್ನು ಅಂಗೀಕರಿಸಿದೆ. ಜೈವಿಕ ವೈವಿಧ್ಯತೆಯ ಸಂರಕ್ಷಣೆ, ಅವುಗಳ ಘಟಕಗಳ ಸುಸ್ಥಿರ ಬಳಕೆಯಿಂದ ದೊರೆಯುವ ಲಾಭಗಳ ನಿಷ್ಪಕ್ಷಪಾತ ಮತ್ತು ನ್ಯಾಯ ಸಮ್ಮತ ಹಂಚಿಕೆ ಮತ್ತು ಅದಕ್ಕೆ ಸಂಬಂಧಿಸಿದ ವಿಷಯಗಳಿಗೆ ಅಧಿನಿಯಮವು ಅವಕಾಶ ಕಲ್ಪಿಸಿದೆ. ಅಧಿನಿಯಮದ ಸೆಕ್ಷನ್ 37ರ ಮೇರೆಗೆ ಜೈವಿಕ ವೈವಿಧ್ಯ ಪರಂಪರಾಗತ ತಾಣಗಳನ್ನು ಘೋಷಿಸಬಹುದಾಗಿದೆ. ಭಾರತ ಸರ್ಕಾರದ ಮಾರ್ಗಸೂಚಿಯ ಮೇರೆಗೆ ವಿಶಿಷ್ಟವಾದ ಜೀವವೈವಿಧ್ಯ, ಅಪರೂಪದ ಪ್ರಭೇಧಗಳು, ವಿನಾಶದ ಅಂಚಿನಲ್ಲಿರುವ ಪ್ರಭೇಧಗಳು, ಪ್ರಾಚೀನ ವನ್ಯ ಪ್ರಭೇಧಗಳು ಜೀವ ವಿಕಾಸದ ಮಹತ್ವವುಳ್ಳ ಪ್ರಭೇಧಗಳು ಹೊಂದಿರುವ ಪ್ರದೇಶಗಳು ಮತ್ತು ಸಂಸ್ಕೃತಿ ಅಥವಾ ಸೌಂದರ್ಯ ಮಹತ್ವವುಳ್ಳ ಪ್ರದೇಶಗಳನ್ನು ಜೀವವೈವಿಧ್ಯ ಪರಂಪರಾಗತ ತಾಣಗಳೆಂದು ಘೋಷಿಸಬಹುದಾಗಿದೆ.

ಹೊಗರೇಕಾನ್ ಪ್ರದೇಶವನ್ನು ಜೀವವೈವಿಧ್ಯ ಪರಂಪರಾಗತ ತಾಣವನ್ನಾಗಿ ಘೋಷಿಸಲು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಚಿಕ್ಕಮಗಳೂರು ಅರಣ್ಯ ವಿಭಾಗ, ಚಿಕ್ಕಮಗಳೂರು, ಇವರು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಅಧ್ಯಕ್ಷರು, ಪಶ್ಚಿಮ ಘಟ್ಟ ಕಾರ್ಯಪಡೆ, ಬೆಂಗಳೂರು, ಇವರು ಸಹ ಶಿಫಾರಸ್ಸು ಮಾಡಿರುತ್ತಾರೆ. ಕಡೂರು ತಾಲ್ಲೂಕಿನ ಬಳ್ಳಿಗನೂರು ಗ್ರಾಮ ಪಂಚಾಯ್ತಿಯ ಜೀವವೈವಿಧ್ಯ ಮಂಡಳಿಯು ಸದರಿ ಪ್ರದೇಶವನ್ನು ಜೀವವೈವಿಧ್ಯ ಪರಂಪರಾಗತ ತಾಣವೆಂದು ಘೋಷಿಸಲು ಶಿಫಾರಸ್ಸು ಮಾಡಿರುತ್ತದೆ, ಇದರೊಂದಿಗೆ ಆಸಕ್ತ ಸಂಘಟನೆಗಳು, ಈ ವಿಷಯದ ಬಗ್ಗೆ ಆಸಕ್ತಿವಹಿಸಿವೆ.

**ಪ್ರದೇಶದ ವಿವರಗಳು ಈ ಕೆಳಕಂಡಂತೆ ಇರುತ್ತದೆ.**

| | | | |
|---|---|---|---|
| 1. ಪ್ರದೇಶ | : | ಹೊಗರೇಕಾನ್ | |
| 2. ತಾಲ್ಲೂಕು | : | ಕಡೂರು | |
| 3. ಜಿಲ್ಲೆ | : | ಚಿಕ್ಕಮಗಳೂರು | |
| 4. ವಿಸ್ತೀರ್ಣ | : | 2506 ಎಕರೆ | |
| 5. ಸ್ಥಳ | : | ಬಿರೂರು – ಲಿಂಗದಹಳ್ಳಿ ರಸ್ತೆಯ ಎಡಭಾಗ | |
| 6. ಸರ್ವೆ ಹಾಗೂ ವಿಸ್ತೀರ್ಣ | | | |
| ಹೊಗರೇಹಳ್ಳಿ ಸರ್ವೆ ನಂ. | : | ಸಂ.77 – | 384.06 ಎಕರೆ |
| | | ಸಂ.94 – | 358.17 ಎಕರೆ |
| | | ಸಂ.95 – | 336.28 ಎಕರೆ |
| | | ಸಂ.140 – | 395.25 ಎಕರೆ |

| | |
|---|---|
| ಸಂ.142 – | 446.18 ಎಕರೆ |
| ಸಂ.143 – | 586.32 ಎಕರೆ |
| ಒಟ್ಟು– | **2508.15 ಎಕರೆ** |

**ಪ್ರದೇಶದ ಮಹತ್ವ :** ಹೊಗರೇಕಾನ್ ಪ್ರದೇಶವು ಸಾಧಾರಣವಾಗಿ ಬೆಳೆದಿರುವ ಮರಗಳಿಂದ ಕೂಡಿರುವ ಕಂದಾಯ ಇಲಾಖೆಗೆ ಸೇರಿರುವ ಭೂಮಿಯಾಗಿರುತ್ತದೆ. ಸದರಿ ಪ್ರದೇಶ ಅರಣ್ಯ ಇಲಾಖೆಯ ಕಬ್ಜೆಯಲ್ಲಿ ಇರುತ್ತದೆ. ಎಲೆ ಉದುರುವ ಸಸ್ಯ ಪ್ರಬೇಧಗಳನ್ನು ಹೊಂದಿರುವ ಈ ಪ್ರದೇಶವು ಬಾಬಾಬುಡನಗಿರಿ, ಕೆಮ್ಮಣ್ಣುಗುಂಡಿ, ಸನಿಹದಲ್ಲಿರುವ ಭದ್ರ ವನ್ಯಜೀವಿ ಧಾಮ ಹಾಗೂ ಮುಂದೆ ಎಮ್ಮೆದೊಡ್ಡಿ ಹುಲಿ ಸಂರಕ್ಷಣಾ ಪ್ರದೇಶದ ಸಸ್ಯ ಸಂಪತ್ತಿನೊಂದಿಗೆ ಹೊಂದಿಕೊಂಡಿರುತ್ತದೆ, ಕುದುರೆಮುಖ ಮತ್ತು ಭದ್ರ ವನ್ಯಜೀವಿ ಧಾಮದ ನಡುವೆ ವನ್ಯಜೀವಿ ಮೊಗಸಾಲೆಯ ಕೊಂಡಿಯಾಗಿದೆ. ಈ ಪ್ರದೇಶದಲ್ಲಿ ವಿಶಿಷ್ಟಪೂರ್ಣ ಶೋಲಾ ಸಸ್ಯ ಸಂಪತ್ತು ಹಾಗೂ ಹುಲ್ಲಗಾವಲು ಇರುತ್ತದೆ. ಔಷಧ ಗುಣವುಳ್ಳ ಅತಿ ಮಹತ್ವಪೂರ್ಣ ಸಸ್ಯಗಳ ಜೊತೆಗೆ ಅನೇಕ ಬಗೆಯ ಪ್ರಾಣಿಗಳ ಆಶ್ರಯ ತಾಣವಾಗಿದೆ.

ಕರ್ನಾಟಕ ಜೀವವೈವಿಧ್ಯ ಮಂಡಳಿಯು ತನ್ನ ಸಭೆಯಲ್ಲಿ ಸದರಿ ಪ್ರಸ್ತಾವನೆಯನ್ನು ಪರಿಗಣಿಸಿ, ಸದರಿ ಪ್ರದೇಶವನ್ನು ಜೀವವೈವಿಧ್ಯ ಪರಂಪರಾಗತ ತಾಣವಾಗಿ ಘೋಷಿಸಲು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುವ ಹಿನ್ನೆಲೆಯಲ್ಲಿ ಜೀವವೈವಿಧ್ಯ ಅಧಿನಿಯಮ 2002ರ ಸೆಕ್ಷನ್ 37(i)ರ ಮೇರೆಗೆ ಈ ಮೇಲಿನ ಪ್ರದೇಶವನ್ನು ಜೀವವೈವಿಧ್ಯ ಪರಂಪರಾಗತ ತಾಣವೆಂದು ಘೋಷಿಸಲು ಸರ್ಕಾರವು ಉದ್ದೇಶಿಸಿದೆ. ಸಾಮಾನ್ಯ ಜನತೆ ಹಾಗೂ ಎಲ್ಲ ಸಂಬಂಧಪಟ್ಟವರ ಗಮನಕ್ಕೆ ತರಬಯಸುವುದೇನೆಂದರೆ ಈ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಸದರಿ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ ನಂತರ 30 ದಿನಗಳ ಒಳಗಾಗಿ ಲಿಖಿತವಾಗಿ ಸದಸ್ಯ ಕಾರ್ಯದರ್ಶಿ, ಕರ್ನಾಟಕ ಜೀವವೈವಿಧ್ಯ ಮಂಡಳಿ, ನೆಲಮಹಡಿ, ವನವಿಕಾಸ ಕಟ್ಟಡ, ಮಲ್ಲೇಶ್ವರಂ, ಬೆಂಗಳೂರು–560003, ಫೋನ್ :080–23448783, ಫ್ಯಾಕ್ಸ್:080–23440535, ಇ–ಮೇಲ್:kbb.kar@gmail.com ವಿಳಾಸಕ್ಕೆ ಸಲ್ಲಿಸುವುದು.

30 ದಿನಗಳ ನಂತರ ಸಲ್ಲಿಸಲಾದ ಆಕ್ಷೇಪಣೆಗಳನ್ನು ಗಣನೆಗೆ ತೆಗೆದುಕೊಳ್ಳಲಾಗುವುದಿಲ್ಲ, ಹೆಚ್ಚಿನ ಮಾಹಿತಿಗಾಗಿ ಸದಸ್ಯ ಕಾರ್ಯದರ್ಶಿಗಳು, ಕರ್ನಾಟಕ ಜೀವವೈವಿಧ್ಯ ಮಂಡಳಿ, ಬೆಂಗಳೂರು ಇವರ ಮೇಲ್ಕಂಡ ವಿಳಾಸದಲ್ಲಿ ಪಡೆಯಬಹುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ. ಮನೋಹರ್**

ಸರ್ಕಾರದ ಅಧೀನ ಕಾರ್ಯದರ್ಶಿಗಳು,

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ

**FOREST, ECOLOGY & ENVIRONMENT SECRETARIAT**

**NOTIFICATION**

**No: FEE 35 ENV 2009, Bangalore, dated: 15th January, 2010.**

After the convention on Biological Diversity negotiation, the Government of India has passed Biological Diversity Act 2002, for the purpose of conservation of biodiversity, sustainable use of components of biodiversity, fair and equitable sharing of benefits arising out of the utilization of genetic resources. Section 37 of the Act provides for declaration of certain areas as Biodiversity Heritage Sites by the State Government. As per the guidelines issued by the Central Government, the areas having unique ecological fragile ecosystem, species richness, high endemism, presence of rare, endemic and threatened species, keystone species, species of evolutionary significance, wild ancestors of domestic/cultivated species or land races or other varieties, past pre-eminence of biological components represented by fossil bodies and having cultural or aesthetic values may be declared as heritage sites.

A proposal has been received from the Deputy Conservator of Forests, Chikmagalur recommending Hogrekan area to declare as heritage site. The recommendations have also been received

from Chairman, Western Ghats Task Force, Bangalore, Biodiversity Management Committee of Balliganur Gram Panchayat, Kadur Taluk, Chikmagalur District, various interested organizations and stakeholders. The Karnataka Biodiversity Board in its meeting has considered the proposal and recommended to the Government to declare the same as Biodiversity Heritage Site under Biological Diversity Act, 2002. The details of area are as below:

| | | |
|---|---|---|
| 1 | Name of the Site - | Hogrekan |
| 2 | Name of the district - | Chikmagalur |
| 3 | Taluk - | Kadur |
| 4 | Gram Panchayat - | Balliganuru |
| 5 | Extent - | 2508.15 acres |
| 6 | Location - | Left site of Birur to Lingadahalli road. |
| 6 | Hogrehalli Survey numbers - | No.77 - 384.06 acres<br>No.94 - 358.17 acres<br>No.95 - 336.28 acres<br>No.140 - 395.25 acres<br>No.142 - 446.18 acres<br>No.143 - 586.32 acres |
| | | Total 2508.15 acres |

**Significance:** Hogrekan is moderately wooded revenue land under the possession of Forest Department. The vegetation of the area is of dry deciduous type and has a link with Bababudanagiri and Kemmangundi, adjoining Bhadra Wildlife Sanctuary and Yemmedoddi Tiger Reserve and serving as Wildlife corridor between Kudremukha and Bhadra Wild sanctuary. The area has unique shola vegetation and grassland with number of floral species which are unique and having medicinal value.

On the recommendation of Karnataka Biodiversity Board, the government intends to declare the above site as Biodiversity Heritage Site under Section 37(i) of Biological Diversity Act 2002. It is brought to the notice of the general public and all concerned; the government invites objections, if any, on the above issue. The objections should reach the Member Secretary, Karnataka Biodiversity Board, 'Vanavikas' building, 18th cross, Malleshwaram, Bangalore, Phone: 080-23448783, Fax: 080-23440535, e-mail: kbb.kar@gmail.com, in writing within 30 days from the date of publication in the Karnataka Gazette. The objections received after the stipulated time will not be considered and the same will stand rejected. Further details, if any, may be obtained from the Member Secretary, Karnataka Biodiversity board on the above address.

By Order and in the name of the Governor of Karnataka

P.R. 79

**B.MANOHAR**

Under Secretary to Government

Forest, Ecology & Environment Department